# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1584 (1957) |
| 2. | ಸದಸ್ಯರ ಹೆಸರು | : | ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) |
| 3. | ಉತ್ತರಿಸಬೇಕಾದ ದಿನಾಂಕ | : | 26-03-2020 |
| 4. | ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಮೆಟ್ರೋ ರೈಲು ನಿಗಮ (ಬಿಎಂಆರ್‌ಸಿಎಲ್)ದಲ್ಲಿ ಎಷ್ಟು ರೈಲ್ವೇ ನಿಲ್ದಾಣಗಳಿವೆ; ಇವುಗಳಿಗೆ ಯಾವ ಹೆಸರುಗಳನ್ನು ಇಡಲಾಗಿದೆ; ಹೆಸರುಗಳನ್ನು ನೀಡಲು ಸರ್ಕಾರದಿಂದ ಅನುಮತಿ ಪಡೆಯಲಾಗಿದೆಯೇ; (ವಿವರವಾದ ಮಾಹಿತಿ ನೀಡುವುದು) | ಬೆಂಗಳೂರು ಮೆಟ್ರೋ ರೈಲ್ ಯೋಜನೆಯ ಹಂತ-1ರ ಯೋಜನೆಯಡಿಯಲ್ಲಿ 40 ನಿಲ್ದಾಣಗಳು, ಹಂತ-2ರಲ್ಲಿ 61 ನಿಲ್ದಾಣಗಳು, ಹಂತ 2ಎ ಯೋಜನೆಯಡಿಯಲ್ಲಿ 13 ನಿಲ್ದಾಣಗಳು, ಮತ್ತು ಹಂತ 2ಬಿ ಯೋಜನೆಯಡಿಯಲ್ಲಿ 17 ನಿಲ್ದಾಣಗಳಿದ್ದು, ಹೆಸರುಗಳನ್ನು ಸರ್ಕಾರದಿಂದ ಅನುಮತಿ ಪಡೆಯಲಾಗಿದೆ ಅವುಗಳ ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಲಾಗಿದೆ. |
| ಆ) | ಸದರಿ ನಿಲ್ದಾಣಗಳಲ್ಲಿ ದ್ವಿಚಕ್ರ ವಾಹನಗಳನ್ನು ನಿಲ್ಲಿಸಲು ಪಾರ್ಕಿಂಗ್ ವ್ಯವಸ್ಥೆ ಇದೆಯೇ; ಹಾಗಿದ್ದಲ್ಲಿ, ಕಳೆದ ವರ್ಷ ಹಾಗೂ ಪ್ರಸ್ತುತ ವರ್ಷ ಎಷ್ಟು ಮೊತ್ತಕ್ಕೆ ಟೆಂಡರ್ ನೀಡಲಾಗಿದೆ; (ನಿಲ್ದಾಣವಾರು, ಏಜೆನ್ಸಿವಾರು, ವಿವರವಾದ ಮಾಹಿತಿ ನೀಡುವುದು) | ಹಂತ-1ರ ಯೋಜನೆಯಡಿಯಲ್ಲಿ 25 ಮೆಟ್ರೋ ನಿಲ್ದಾಣಗಳಲ್ಲಿ ದ್ವಿಚಕ್ರ ವಾಹನಗಳನ್ನು ನಿಲ್ಲಿಸಲು ಪಾರ್ಕಿಂಗ್ ವ್ಯವಸ್ಥೆ ಮಾಡಲಾಗಿದೆ.<br><br>ಟೆಂಡರ್‌ಗಳ ವಿವರಗಳನ್ನು **ಅನುಬಂಧ-2**ರಲ್ಲಿ ಲಗತ್ತಿಸಲಾಗಿದೆ. |
| ಇ) | ಪಾರ್ಕಿಂಗ್ ವಾಹನಗಳ ಸಮೀಕ್ಷೆ ನಡೆಸಲಾಗಿದೆಯೇ; ಟೆಂಡರ್ ದರ ಕನಿಷ್ಠ ಬೆಲೆ ನಿಗಧಿಪಡಿಸಲು ಅನುಸರಿಸುತ್ತಿರುವ ಮಾನದಂಡಗಳೇನು; | ಪಾರ್ಕಿಂಗ್ ವಾಹನಗಳ ಸಮೀಕ್ಷೆಯನ್ನು ನಡೆಸಲಾಗಿದೆ.<br><br>ಮೊದಲ ಬಾರಿ ಟೆಂಡರ್ ನೀಡುವ ಸಂದರ್ಭದಲ್ಲಿ ಗುರುತಿಸಿರುವ ಜಾಗದಲ್ಲಿ ಗರಿಷ್ಟವಾಗಿ ನಿಲ್ಲಿಸಬಹುದಾದ ವಾಹನಗಳಿಗೆ ದಿನಕ್ಕೆ ವಿಧಿಸಲಾಗುವ ದರದ ಅನ್ವಯ ವಾರ್ಷಿಕವಾಗಿ ಲೆಕ್ಕ ಹಾಕಿ 40% ಮೊತ್ತವನ್ನು ಟೆಂಡರ್‌ಗೆ ಇಡಲಾಗಿದೆ.<br><br>ಮರು ಟೆಂಡರ್ ಸಂದರ್ಭದಲ್ಲಿ ಹಿಂದಿನ ಅವಧಿಗೆ ನಿಗದಿಪಡಿಸಿದ ಕನಿಷ್ಠ ಟೆಂಡರ್‌ನ ಮೊತ್ತಕ್ಕೆ ಶೇ. 5 ರಿಂದ 10ರಷ್ಟು ಹೆಚ್ಚಳ ಮಾಡಿ, ಮೊತ್ತವನ್ನು ನಿಗದಿಪಡಿಸಿ ಟೆಂಡರ್ ಕರೆಯಲಾಗುವುದು. |
| ಈ) | ನಿಗಮದ ಅಧಿಕಾರಿಗಳು ಮತ್ತು ಗುತ್ತಿಗೆದಾರರ ಒಳ ಒಪ್ಪಂದದಿಂದ ನಿಗಮಕ್ಕೆ ನಷ್ಟ ಉಂಟಾಗಿರುವುದು ನಿಜವೇ; | ಎಲ್ಲಾ ಪಾರ್ಕಿಂಗ್ ಗುತ್ತಿಗೆಗಳನ್ನು ಟೆಂಡರ್ ಮೂಲಕವೇ ನೀಡುತ್ತಿದ್ದು, ವ್ಯವಸ್ಥಾಪಕ ನಿರ್ದೇಶಕರು ರಚಿಸಿದ ಸಮಿತಿಗಳು ನೀಡಿದ ವರದಿ ಹಾಗೂ ಶಿಫಾರಸ್ಸಿನಂತೆ ಗುತ್ತಿಗೆದಾರರನ್ನು ಅಂತಿಮಗೊಳಿಸಲಾಗುತ್ತದೆ. ಆದ್ದರಿಂದ ನಿಗಮದ ಅಧಿಕಾರಿಗಳು ಮತ್ತು ಗುತ್ತಿಗೆದಾರರ ನಡುವೆ ಯಾವುದೇ ಒಳ ಒಪ್ಪಂದಗಳು ನಡೆದಿರುವುದಿಲ್ಲ. |
| ಉ) | ನಾಗಸಂದ್ರ, ಪೀಣ್ಯ ನಿಲ್ದಾಣಗಳು ಈ ಹಿಂದೆ ಎಷ್ಟು ಹಣಕ್ಕೆ ಒಪ್ಪಂದವಾಗಿರುತ್ತವೆ; ನಂತರ ಅಧಿಕಾರಿಗಳ ಒಪ್ಪಂದದಿಂದ ಎಷ್ಟು ಹಣಕ್ಕೆ ಟೆಂಡರ್ ನಿಗಧಿಯಾಗಿರುತ್ತದೆ; (ವಿವರವಾದ ಮಾಹಿತಿ ನೀಡುವುದು) | ಟೆಂಡರ್‌ನಲ್ಲಿ ನಿಗದಿಪಡಿಸಿದ ಕನಿಷ್ಠ ಮೊತ್ತಕ್ಕಿಂತ ಹೆಚ್ಚು ಬಿಡ್ ನೀಡಿದವರಿಗೆ ಟೆಂಡರ್ ನೀಡುತ್ತಿದ್ದು, ಅದರಂತೆ ನಾಗಸಂದ್ರ ನಿಲ್ದಾಣಕ್ಕೆ ರೂ. 51,99,999/-ಕ್ಕೆ ಹೈದರಾಬಾದ್ ಮೂಲದ ಪಿ.ಎ.ಪಿ. ಎಂಟರ್‌ಪ್ರೈಸಸ್ ಇವರಿಗೆ ದಿನಾಂಕ: 25/07/2018ರಂದು ನೀಡಲಾಗಿತ್ತು. |
| ಊ) | ಇದರ ಸಂಬಂಧ ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? | ಆದರೆ ಇವರು ತಾವು ಸಲ್ಲಿಸಿದ ಅತಿಯಾದ ಮೊತ್ತಕ್ಕೆ ನೀಡಿದ ಬಿಡ್‌ನಿಂದ ವಾಸ್ತವವಾಗಿ ಗುತ್ತಿಗೆಗೆ ನೀಡಿರುವ ಸಂಪೂರ್ಣ ಜಾಗದಲ್ಲಿ ವಾಹನಗಳನ್ನು ನಿಲ್ಲಿಸಿದರೂ ಸಹ ತಮ್ಮ ಬಂಡವಾಳ ವಾಪಾಸ್ಸಾಗದೆ ನಷ್ಟವಾಗುತ್ತಿರುವುದರಿಂದ ತಮ್ಮ ಗುತ್ತಿಗೆಯನ್ನು ಅಂತ್ಯಗೊಳಿಸಲು ಮನವಿ ನೀಡಿರುತ್ತಾರೆ. |

| | | |
|---|---|---|
| | | ಇವರ ಮನವಿಯನ್ನು ಕಾಂಪಿಟೆಂಟ್ ಅಥಾರಿಟಿಯವರಿಂದ ಅನುಮತಿ ಪಡೆದು ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು. ನಂತರದ ಟೆಂಡರ್‌ನಲ್ಲಿ ರೂ.13,60,300/ಕ್ಕೆ ಶ್ರೀ ಎಂ.ಕೆ. ಬೆಳವಾಡಿ ಇವರಿಗೆ ನೀಡಲಾಗಿದೆ. **ಇದಕ್ಕೂ ಮೊದಲು ಶ್ರೀ ರಾಜೇಂದ್ರ ಬಾಬುರವರು ರೂ. 10,77,111/-ಗೆ 2 ವರ್ಷಗಳ ಟೆಂಡರ್ ಅವಧಿಯನ್ನು ಪೂರ್ಣಗೊಳಿಸಿರುತ್ತಾರೆ.**<br><br>ಪೀಣ್ಯ ನಿಲ್ದಾಣಕ್ಕೂ ಸಹ ಟೆಂಡರ್‌ನ ನಿಯಮಾವಳಿಗಳನ್ನು ಪಾಲಿಸಿದ್ದು, ಅದರಂತೆ ರೂ. 37,41,250/-ಕ್ಕೆ ಪೀಕಾಕ್ ಅಲೈಡ್ ಸರ್ವೀಸಸ್ ಇವರಿಗೆ ದಿನಾಂಕ: 21/04/2019ರಂದು ನೀಡಲಾಗಿತ್ತು. ಆದರೆ ಇವರೂ ಸಹ ತಾವು ಸಲ್ಲಿಸಿದ ಅತಿಯಾದ ಮೊತ್ತಕ್ಕೆ ನೀಡಿದ ಬಿಡ್‌ನಿಂದ ವಾಸ್ತವವಾಗಿ ಗುತ್ತಿಗೆಗೆ ನೀಡಿರುವ ಸಂಪೂರ್ಣ ಜಾಗದಲ್ಲಿ ವಾಹನಗಳನ್ನು ನಿಲ್ಲಿಸಿದರೂ ಸಹ ತಮ್ಮ ಬಂಡವಾಳ ವಾಪಾಸ್ಸಾಗದೆ ನಷ್ಟವಾಗುತ್ತಿರುವುದರಿಂದ ತಮ್ಮ ಗುತ್ತಿಗೆಯನ್ನು ಅಂತ್ಯಗೊಳಿಸಲು ಮನವಿ ನೀಡಿರುತ್ತಾರೆ. ಇವರ ಮನವಿಯನ್ನು ಕಾಂಪಿಟೆಂಟ್ ಅಥಾರಿಟಿಯವರಿಂದ ಅನುಮತಿ ಪಡೆದು ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು. ಮರುಟೆಂಡರ್‌ನಲ್ಲಿ ರೂ. 12,56,000/- ಕ್ಕೆ ಪೀಕಾಕ್ ಅಲೈಡ್ ಸರ್ವೀಸಸ್ ಇವರಿಗೆ ನೀಡಲಾಗಿದೆ. **ಇದಕ್ಕೂ ಮೊದಲು ಶ್ರೀ ರಾಜೇಂದ್ರ ಬಾಬುರವರು ರೂ. 5,27,111/- ಗೆ 2 ವರ್ಷಗಳ ಟೆಂಡರ್ ಅವಧಿಯನ್ನು ಪೂರ್ಣಗೊಳಿಸಿರುತ್ತಾರೆ.**<br><br>ಈ ಎಲ್ಲಾ ಗುತ್ತಿಗೆಗಳು ಟೆಂಡರ್ ಮೂಲಕವೇ ನಡೆದಿದ್ದು, ನಿಗಮದ ಅಧಿಕಾರಿಗಳಾಗಲೀ, ಗುತ್ತಿಗೆದಾರರಾಗಲೀ ಯಾವುದೇ ಒಳ ಒಪ್ಪಂದವನ್ನು ಮಾಡಿಕೊಂಡಿರುವುದಿಲ್ಲ.<br><br>ಟೆಂಡರ್‌ನ ಪ್ರಕ್ರಿಯೆಯಲ್ಲಿ ಮೊದಲಿಗೆ ಎಲ್ಲಾ ಬಿಡ್ಡರ್‌ಗಳ ಹಾಗೂ ಸಮಿತಿಯ ಸಮಕ್ಷಮದಲ್ಲಿ ಹರಾಜು ಪ್ರಕ್ರಿಯೆಯನ್ನು ನಡೆಸಲಾಗುವುದು. ತದನಂತರ ಮುಚ್ಚಿದ ಲಕೋಟೆಯಲ್ಲಿ ಸಲ್ಲಿಸಿದ ಬಿಡ್‌ನ್ನು ಬಿಡ್ಡರ್‌ಗಳ ಹಾಗೂ ಸಮಿತಿಯ ಸಮಕ್ಷಮದಲ್ಲಿ ತೆರೆದು, ಓದಲಾಗುವುದು. ನಂತರ ಈ ಎರಡರಲ್ಲಿ ಅತಿ ಹೆಚ್ಚು ಬಿಡ್ ಮಾಡಿದ ಟೆಂಡರ್‌ದಾರರಿಗೆ ಸಮಿತಿಯ ವರದಿಯಂತೆ ಕಾಂಪಿಟೆಂಟ್ ಅಥಾರಿಟಿಯವರಿಂದ ಅನುಮತಿ ಪಡೆದು ಗುತ್ತಿಗೆಯನ್ನು ನೀಡಲಾಗುವುದು. ಈ ಮೂಲಕ ಟೆಂಡರ್‌ನ ಎಲ್ಲಾ ಪ್ರಕ್ರಿಯೆಗಳನ್ನು ಪಾರದರ್ಶಕವಾಗಿ ನಡೆಸಲಾಗುತ್ತಿದೆ.<br><br>ಅಲ್ಲದೇ ಈ ರೀತಿಯಾಗಿ ಹೆಚ್ಚು ಮೊತ್ತಕ್ಕೆ ಬಿಡ್ ಸಲ್ಲಿಸಿ, ನಂತರ ಗುತ್ತಿಗೆಯನ್ನು ಅಂತ್ಯಗೊಳಿಸುವ ಮನವಿಯನ್ನು ತಡೆಯಲು, ಪ್ರಸ್ತುತ ಟೆಂಡರ್‌ಗಳಲ್ಲಿ ಕನಿಷ್ಠ ಒಂದು ವರ್ಷದ ಅವಧಿಗೆ ಗುತ್ತಿಗೆಯನ್ನು ನಡೆಸಲೇಬೇಕೆಂಬ ಷರತ್ತಿನೊಂದಿಗೆ ಗುತ್ತಿಗೆಯನ್ನು ನೀಡಲಾಗುತ್ತಿದೆ. |

ಕಡತ ಸಂಖ್ಯೆ: ನಅಇ 99 ಪಿ.ಆರ್.ಜೆ 2020

ಬಿ.ಎಸ್. ಯಡಿಯೂರಪ್ಪ
**(ಬಿ.ಎಸ್. ಯಡಿಯೂರಪ್ಪ)**
ಮುಖ್ಯಮಂತ್ರಿಗಳು

ಅನುಬಂಧ-1

## ಬೆಂಗಳೂರು ಮೆಟ್ರೊ ರೈಲು ನಿಗಮ ನಿಯಮಿತ

ಬೆಂಗಳೂರು ಮೆಟ್ರೋ ರೈಲ್ ಯೋಜನೆಯ ಹಂತ-1, 2, 2ಎ ಹಾಗೂ 2ಬಿ ರ ನಿಲ್ದಾಣಗಳ ವಿವರ ಕೆಳಕಂಡಂತಿರುತ್ತದೆ:

ಹಂತ-1

| | ಪೂರ್ವ-ಪಶ್ಚಿಮ ಕಾರಿಡಾರ್‌ನ ಉದ್ದ 18.10 ಕಿ.ಮೀ. | | ಉತ್ತರ-ದಕ್ಷಿಣ ಕಾರಿಡಾರ್‌ನ ಉದ್ದ 24.20 ಕಿ.ಮೀ. |
|---|---|---|---|
| 1 | ಬೈಯಪ್ಪನಹಳ್ಳಿ | 1 | ನಾಗಸಂದ್ರ |
| 2 | ಸ್ವಾಮಿ ವಿವೇಕಾನಂದ ರಸ್ತೆ | 2 | ದಾಸರಹಳ್ಳಿ |
| 3 | ಇಂದ್ರಾನಗರ | 3 | ಜಾಲಹಳ್ಳಿ |
| 4 | ಹಲಸೂರು | 4 | ಪೀಣ್ಯ ಕೈಗಾರಿಕಾ ಪ್ರದೇಶ |
| 5 | ಟ್ರಿನಿಟಿ | 5 | ಪೀಣ್ಯ |
| 6 | ಮಹಾತ್ಮ ಗಾಂಧಿ ರಸ್ತೆ | 6 | ಗೊರಗುಂಟೆಪಾಳ್ಯ ಮೆಟ್ರೋ ನಿಲ್ದಾಣ |
| 7 | ಕಬ್ಬನ್ ಪಾರ್ಕ್ | 7 | ಯಶವಂತಪುರ |
| 8 | ಬಿ.ಆರ್. ಅಂಬೇಡ್ಕರ್ ನಿಲ್ದಾಣ ವಿಧಾನ ಸೌಧ | 8 | ಸ್ಯಾಂಡಲ್ ಸೋಪ್ ಕಾರ್ಖಾನೆ |
| 9 | ಸರ್. ಎಂ. ವಿಶ್ವೇಶ್ವರಯ್ಯ ಸೆಂಟ್ರಲ್ ಕಾಲೇಜ್ | 9 | ಮಹಾಲಕ್ಷ್ಮಿ |
| 10 | ನಾಡಪ್ರಭು ಕೆಂಪೇಗೌಡ ನಿಲ್ದಾಣ ಮೆಜೆಸ್ಟಿಕ್ | 10 | ರಾಜಾಜಿನಗರ |
| 11 | ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ರೈಲ್ವೇ ನಿಲ್ದಾಣ | 11 | ಶ್ರೀರಾಂಪುರ |
| 12 | ಮಾಗಡಿ ರಸ್ತೆ | 12 | ಮಹಾಕವಿ ಕುವೆಂಪು ರಸ್ತೆ |
| 13 | ಶ್ರೀ ಬಾಲಗಂಗಾಧರನಾಥ ಸ್ವಾಮಿ ನಿಲ್ದಾಣ ಹೊಸಹಳ್ಳಿ | 13 | ಮಂತ್ರಿ ಸ್ಕ್ವೇರ್ ಸಂಪಿಗೆ ರಸ್ತೆ ನಿಲ್ದಾಣ |
| 14 | ವಿಜಯನಗರ | 14 | ನಾಡಪ್ರಭು ಕೆಂಪೇಗೌಡ ನಿಲ್ದಾಣ ಮೆಜೆಸ್ಟಿಕ್ |
| 15 | ಅತ್ತಿಗುಪ್ಪೆ | 15 | ಕೃಷ್ಣ ರಾಜೇಂದ್ರ ಮಾರ್ಕೆಟ್ |
| 16 | ದೀಪಾಂಜಲಿನಗರ | 16 | ನ್ಯಾಷನಲ್ ಕಾಲೇಜ್ |
| 17 | ಮೈಸೂರು ರಸ್ತೆ ನಿಲ್ದಾಣ | 17 | ಲಾಲ್‌ಬಾಗ್ |
| | | 18 | ಸೌತ್‌ಎಂಡ್ ಸರ್ಕಲ್ |
| | | 19 | ಜಯನಗರ |
| | | 20 | ರಾಷ್ಟ್ರೀಯ ವಿದ್ಯಾಲಯ ರಸ್ತೆ |
| | | 21 | ಬನಶಂಕರಿ |
| | | 22 | ಜಯಪ್ರಕಾಶ್ ನಗರ |
| | | 23 | ಯಲಚೇನಹಳ್ಳಿ |

ಹಂತ-2

| ರೀಚ್-1ಇ – ಬೈಯ್ಯಪ್ಪನಹಳ್ಳಿಯಿಂದ ಐಟಿಪಿಎಲ್ – ವೈಟ್‌ಫೀಲ್ಡ್ – 14 ನಿಲ್ದಾಣಗಳು | | | |
|---|---|---|---|
| 1 | ಬೈಯ್ಯಪ್ಪನಹಳ್ಳಿ | 8 | ಕುಂದನಹಳ್ಳಿ |
| 2 | ಬೆನ್ನಿಗಾನಹಳ್ಳಿ | 9 | ನಲ್ಲೂರು ಹಳ್ಳಿ |
| 3 | ಕೆ.ಆರ್. ಪುರಂ | 10 | ಸಾದರಮಂಗಲ |
| 4 | ಮಹದೇವಪುರ | 11 | ಪಟ್ಟಂದೂರ್ ಅಗ್ರಹಾರ |
| 5 | ಗರುಡಚಾರ್ ಪಾಳ್ಯ | 12 | ಕಾಡುಗೋಡಿ |
| 6 | ಹೂಡಿ ಜಂಕ್ಷನ್ | 13 | ಚನ್ನಸಂದ್ರ |
| 7 | ಸೀತಾರಾಮ ಪಾಳ್ಯ | 14 | ವೈಟ್‌ಫೀಲ್ಡ್ |

| ರೀಚ್–2ಎ – ಮೈಸೂರು ರಸ್ತೆ ಟರ್ಮಿನಲ್‌ನಿಂದ ಚಲ್ಲಘಟ್ಟ ನಿಲ್ದಾಣ – 7 ನಿಲ್ದಾಣಗಳು | | ರೀಚ್–3ಸಿ – ನಾಗಸಂದ್ರದಿಂದ ಬೆಂಗಳೂರು ಅಂತರರಾಷ್ಟ್ರೀಯ ಪ್ರದರ್ಶನ ಕೇಂದ್ರ (ಬಿಐಇಸಿ) – 3 ನಿಲ್ದಾಣಗಳು | | ರೀಚ್–4ಬಿ – ಪುಟ್ಟೇನಹಳ್ಳಿ ಅಡ್ಡರಸ್ತೆಯಿಂದ ಅಂಜನಾಪುರ ಟೌನ್‌ಷಿಪ್ – 5 ನಿಲ್ದಾಣಗಳು | |
|---|---|---|---|---|---|
| 1 | ನಾಯಂಡನಹಳ್ಳಿ | 1 | ದೊಡ್ಡಬಿದರಕಲ್ಲು | 1 | ಕೋಣನಕುಂಟೆ ಕ್ರಾಸ್ |
| 2 | ರಾಜರಾಜೇಶ್ವರಿ ನಗರ | 2 | ಚಿಕ್ಕಬಿದರಕಲ್ಲು | 2 | ದೊಡ್ಡಕಲ್ಲಸಂದ್ರ |
| 3 | ಜ್ಞಾನಭಾರತಿ | 3 | ಮಾದಾವರ | 3 | ವಾಜರಹಳ್ಳಿ |
| 4 | ಪಟ್ಟಣಗೆರೆ | | | 4 | ತಲಘಟ್ಟಪುರ |
| 5 | ಮೈಲಸಂದ್ರ | | | 5 | ಅಂಜನಾಪುರ |
| 6 | ಕೆಂಗೇರಿ ಬಸ್ ಟರ್ಮಿನಲ್ | | | | |
| 7 | ಚಲ್ಲಘಟ್ಟ | | | | |

ರೀಚ್–5 – ಆರ್.ವಿ. ರಸ್ತೆಯಿಂದ ಎಲೆಕ್ಟ್ರಾನಿಕ್ ಸಿಟಿ ಮಾರ್ಗವಾಗಿ ಬೊಮ್ಮಸಂದ್ರ ನಿಲ್ದಾಣದವರೆಗೆ – 16 ನಿಲ್ದಾಣಗಳು

| | | | |
|---|---|---|---|
| 1 | ಆರ್.ವಿ. ರಸ್ತೆ | 9 | ಸಿಂಗಸಂದ್ರ |
| 2 | ರಾಗಿಗುಡ್ಡ | 10 | ಹೊಸ ರಸ್ತೆ |
| 3 | ಜಯದೇವ ಜಂಕ್ಷನ್ | 11 | ಬೆರಟೇನ ಅಗ್ರಹಾರ |
| 4 | ಬಿ.ಟಿ.ಎಂ. ಲೇಔಟ್ | 12 | ಎಲೆಕ್ಟ್ರಾನಿಕ್ ಸಿಟಿ |
| 5 | ಸೆಂಟ್ರಲ್ ಸಿಲ್ಕ್ ಬೋರ್ಡ್ | 13 | ಇನ್‌ಫೋಸಿಸ್ ಫೌಂಡೇಷನ್ ಕೋನಪ್ಪನ ಅಗ್ರಹಾರ |
| 6 | ಬೊಮ್ಮನಹಳ್ಳಿ | 14 | ಹುಸ್ಕೂರು ರಸ್ತೆ |
| 7 | ಹೊಂಗಸಂದ್ರ | 15 | ಹೆಬ್ಬಗೋಡಿ |
| 8 | ಕೂಡ್ಲು ಗೇಟ್ | 16 | ಬೊಮ್ಮಸಂದ್ರ |

ರೀಚ್–6 – ಗೊಟ್ಟಿಗೆರೆಯಿಂದ ನಾಗವಾರದ ವರೆಗೆ – 6 ಎಲಿವೇಟೆಡ್ ಮತ್ತು 12 ಅಂಡರ್‌ಗ್ರೌಂಡ್ ನಿಲ್ದಾಣಗಳು

| ಗೊಟ್ಟಿಗೆರೆಯಿಂದ ತಾವರೆಕೆರೆ | | ಡೈರಿ ಸರ್ಕಲ್‌ನಿಂದ ನಾಗವಾರ | | | |
|---|---|---|---|---|---|
| 1 | ಕಾಳೇನ ಅಗ್ರಹಾರ | 1 | ಡೈರಿ ಸರ್ಕಲ್ | 7 | ಕಂಟೋನ್‌ಮೆಂಟ್ ರೈಲ್ವೆ ನಿಲ್ದಾಣ |
| 2 | ಹುಳಿಮಾವು | 2 | ಲಕ್ಕಸಂದ್ರ | 8 | ಪಾಟರಿ ಟೌನ್ |
| 3 | ಐ.ಐ.ಎಂ.ಬಿ. | 3 | ಲ್ಯಾಂಗ್‌ಫೋರ್ಡ್ ಟೌನ್ | 9 | ಟ್ಯಾನರಿ ರಸ್ತೆ |
| 4 | ಜೆ.ಪಿ. ನಗರ 4ನೇ ಹಂತ | 4 | ರಾಷ್ಟ್ರೀಯ ಮಿಲಿಟರಿ ಸ್ಕೂಲ್ | 10 | ವೆಂಕಟೇಶ್‌ಪುರ |
| 5 | ಜಯದೇವ ಜಂಕ್ಷನ್ | 5 | ಎಂ.ಜಿ. ರಸ್ತೆ | 11 | ಕಾಡುಗೊಂಡನಹಳ್ಳಿ |
| 6 | ತಾವರೆಕೆರೆ | 6 | ಶಿವಾಜಿನಗರ | 12 | ನಾಗವಾರ |

| ಹಂತ–2ಎ<br>ಸೆಂಟ್ರಲ್ ಸಿಲ್ಕ್ ಬೋರ್ಡ್‌ನಿಂದ ಕೆ.ಆರ್. ಪುರಂ | | ಹಂತ–2ಬಿ<br>ಕೆ.ಆರ್. ಪುರಂನಿಂದ ವಿಮಾನ ಟರ್ಮಿನಲ್ | |
|---|---|---|---|
| 1 | ಸೆಂಟ್ರಲ್ ಸಿಲ್ಕ್ ಬೋರ್ಡ್ | 1 | ಕೆ.ಆರ್. ಪುರಂ |
| 2 | ಹೆಚ್‌ಎಸ್‌ಆರ್ ಲೇಔಟ್ | 2 | ಕಸ್ತೂರಿ ನಗರ |
| 3 | ಅಗರ | 3 | ಹೊರಮಾವು |
| 4 | ಇಬ್ಬಲೂರು | 4 | ಹೆಚ್.ಆರ್.ಬಿ.ಆರ್. ಲೇಔಟ್ |
| 5 | ಬೆಳಂದೂರು | 5 | ಕಲ್ಯಾಣನಗರ |

| | | | |
|---|---|---|---|
| 6 | ಕಾಡುಬೀಸನಹಳ್ಳಿ | 6 | ಹೆಚ್‌ಬಿಆರ್ ಲೇಔಟ್ |
| 7 | ಕೋಡಿಬೀಸನಹಳ್ಳಿ | 7 | ನಾಗವಾರ |
| 8 | ಮಾರತ್‌ಹಳ್ಳಿ | 8 | ವೀರಣ್ಣನ ಪಾಳ್ಯ |
| 9. | ಇಸ್ರೋ | 9 | ಕೆಂಪಾಪುರ |
| 10 | ದೊಡ್ಡಾನೆಕುಂದಿ | 10 | ಹೆಬ್ಬಾಳ |
| 11 | ಡಿಆರ್‌ಡಿಒ ಸ್ಪೋರ್ಟ್ಸ್ ಕಾಂಪ್ಲೆಕ್ಸ್ | 11 | ಕೊಡಿಗೇಹಳ್ಳಿ |
| 12 | ಸರಸ್ವತಿ ನಗರ | 12 | ಜಕ್ಕೂರ್ ಕ್ರಾಸ್ |
| 13 | ಕೆ.ಆರ್. ಪುರಂ | 13 | ಯಲಹಂಕ |
| | | 14 | ಬಾಗಲೂರು ಕ್ರಾಸ್ |
| | | 15 | ಬೆಟ್ಟಹಲಸೂರು |
| | | 16 | ದೊಡ್ಡಜಾಲ |
| | | 17 | ಏರ್‌ಪೋರ್ಟ್ ಸಿಟಿ |
| | | 18 | ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ಟರ್ಮಿನಲ್ |

# ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ

ಅನುಬಂಧ–2

| ಕ್ರ. ಸಂ. | ನಿಲ್ದಾಣಗಳ ಹೆಸರು | ಹಿಂದಿನ ಟೆಂಡರ್‌ನ ಕನಿಷ್ಠ ದರ | ಬಿಡ್ ಸಲ್ಲಿಸಿದ ಮೊತ್ತ | ಯಶಸ್ವಿ ಟೆಂಡರ್‌ದಾರರು | ಷರಾ | ಪ್ರಸ್ತುತ ಟೆಂಡರ್‌ನ ಕನಿಷ್ಠ ದರ | ಬಿಡ್ ಸಲ್ಲಿಸಿದ ಮೊತ್ತ | ಯಶಸ್ವಿ ಟೆಂಡರ್‌ದಾರರು |
|---|---|---|---|---|---|---|---|---|
| 1 | ಬೈಯ್ಯಪ್ಪನಹಳ್ಳಿ– ಓ.ಎಂ.ಆರ್. ಬದಿ | 22,85,000/- | 40,90,995/- | ರೋಹಿತ್ ಜಿ.ಬಿ. | ಪೂರ್ಣ ಅವಧಿ ಮುಕ್ತಾಯ | 24,00,000/- | 56,00,000/- | ಪೀಕಾಕ್ ಅಲೈಡ್ ಸರ್ವೀಸಸ್ |
| | ಬೈಯ್ಯಪ್ಪನಹಳ್ಳಿ– ಆರ್.ಎಸ್.ಆರ್ ಬದಿ | 65,00,000/- | 2,66,00,000/- | ವಿಕೆಡ್‌ರೈಡ್ | ಅವಧಿ ಪೂರ್ವ ಮುಕ್ತಾಯ | 70,00,000/- | 1,01,47,099/- | ಎಸ್.ಎಂ.ಪಿ. ಎಂಟರ್‌ಪ್ರೈಸಸ್ |
| 2 | ಎಸ್.ವಿ. ರಸ್ತೆ | 50,00,000/- | 1,20,88,888/- | ವಿಕೆಡ್‌ರೈಡ್ | 1 ವರ್ಷದ ಅವಧಿ ಮುಕ್ತಾಯ | 50,00,000/- | 82,00,000/- | ಪೀಕಾಕ್ ಅಲೈಡ್ ಸರ್ವೀಸಸ್ |
| 3 | ಇಂದಿರಾನಗರ | 5,00,000/- | 13,47,111/- | ರಾಜೇಂದ್ರ ಬಾಬು | ಪೂರ್ಣ ಅವಧಿ ಮುಕ್ತಾಯ | 5,25,000/- | 14,61,777/- | ಎಂ.ಕೆ. ಬೆಳವಾಡಿ |
| 4 | ಕೆಂಪೇಗೌಡ | 25,00,000/- | 42,60,600/- | ಸುಬ್ರಮಣಿ | ಅವಧಿ ಪೂರ್ವ ಮುಕ್ತಾಯ | 10,00,000/- since area was reduced | 16,05,000/- | ಪೀಕಾಕ್ ಅಲೈಡ್ ಸರ್ವೀಸಸ್ |
| 5 | ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ರೈಲ್ವೇ ನಿಲ್ದಾಣ | 25,00,000/- | No Bidders | ಯಾವುದೇ ಬಿಡ್ಡರ್ ಇರುವುದಿಲ್ಲ. | 2 ಬಾರಿ ಟೆಂಡರ್‌ಗೆ ಯಾವುದೇ ಬಿಡ್ ಬಂದಿರುವುದಿಲ್ಲ | 8,00,000/- | 11,65,000/- | ಪೀಕಾಕ್ ಅಲೈಡ್ ಸರ್ವೀಸಸ್ |
| 6 | ಮಾಗಡಿ ರಸ್ತೆ | 15,75,000/- | 15,76,000/- | ಆರ್. ಗಿರಿಜಾ ಶಂಕರ್ | ಅವಧಿ ಪೂರ್ವ ಮುಕ್ತಾಯ | 10,00,000/- | 18,06,000/- | ಕೆ.ಟಿ.ಡಿ. ಎಂಟರ್‌ಪ್ರೈಸಸ್ |
| 7 | ಬಾಲಗಂಗಾಧರನಾಥ ಸ್ವಾಮೀಜಿ ನಿಲ್ದಾಣ – ಹೊಸಹಳ್ಳಿ | 4,00,000/- | 10,17,111/- | ಎಸ್. ಚಂದ್ರಶೇಖರ್ | ಅವಧಿ ಪೂರ್ವ ಮುಕ್ತಾಯ | 3,00,000/- | 3,37,777/- | ಕೆಸಿಐಸಿ ಪ್ರೈ.ಲಿ. |
| 8 | ವಿಜಯನಗರ | - | - | - | - | 3,00,000/- | 3,30,999/- | ಎಸ್.ಎಂ.ಪಿ. |

| | | | | | | | | |
|---|---|---|---|---|---|---|---|---|
| | | | | | | | | ಎಂಟರ್‌ಪ್ರೈಸಸ್ |
| 9 | ದೀಪಾಂಜಲಿ ನಗರ | - | - | - | - | 4,00,000/- | 4,45,000/- | ಎಲ್.ಎಂ. ಸರ್ವೀಸಸ್ |
| 10 | ಮೈಸೂರು ರಸ್ತೆ (ನಾಯಂಡಹಳ್ಳಿ) | 85,00,000/- | 2,60,00,000/- | ವಿಕೆಡ್‌ರೈಡ್ | ಅವಧಿ ಪೂರ್ವ ಮುಕ್ತಾಯ | 1,00,00,000/- | 1,96,00,000/- | ಎಂ.ಕೆ. ಬೆಳವಾಡಿ |
| 11 | ನಾಗಸಂದ್ರ | 10,00,000/- | 51,99,999/- | ಪಿ.ಎ.ಪಿ. ಎಂಟರ್‌ಪ್ರೈಸಸ್ | ಅವಧಿ ಪೂರ್ವ ಮುಕ್ತಾಯ | 10,00,000/- | 13,60,300/- | ಎಂ.ಕೆ. ಬೆಳವಾಡಿ |
| 12 | ದಾಸರಹಳ್ಳಿ | 5,00.000/- | 11,21,406/- | ರೋಹಿತ್ ಜಿ.ಬಿ. | 1 ವರ್ಷದ ಅವಧಿ ಮುಕ್ತಾಯ | 5,25,000/- | 21,35,777/- | ಎಂ ಕೆ. ಬೆಳವಾಡಿ |
| 13 | ಜಾಲಹಳ್ಳಿ | 4,00,000/- | 6,10,000/- | ಹೆಚ್.ಕೆ.ಎಸ್. ಸರ್ವೀಸಸ್ | ಪೂರ್ಣ ಅವಧಿ ಮುಕ್ತಾಯ | 5,00,000/- | 21,20,000/- Area increased | ಪೀಕಾಕ್ ಅಲೈಡ್ ಸರ್ವೀಸಸ್ |
| 14 | ಪೀಣ್ಯ ಇಂಡಸ್ಟ್ರಿ | 3,00,000/- | 17,77,777/- | ಲೇಖಿನ ಎಂಟರ್‌ಪ್ರೈಸಸ್ | ಅವಧಿ ಪೂರ್ವ ಮುಕ್ತಾಯ | 4,00,000/- | 19,02,000/- | ಆರ್.ಗಿರಿಜಾ ಶಂಕರ್ |
| 15 | ಪೀಣ್ಯ | 5,00,000/- | 37,41,250/- | ಪೀಕಾಕ್ ಅಲೈಡ್ ಸರ್ವೀಸಸ್ | ಅವಧಿ ಪೂರ್ವ ಮುಕ್ತಾಯ | 10,00,000/- | 12,56,000/- | ಪೀಕಾಕ್ ಅಲೈಡ್ ಸರ್ವೀಸಸ್ |
| 16 | ಸ್ಯಾಂಡಲ್ ಸೋಪ್ ಫ್ಯಾಕ್ಟರಿ | 9,00,000/- | 28,50,000/- | ವಿಕೆಡ್‌ರೈಡ್ | ಅವಧಿ ಪೂರ್ವ ಮುಕ್ತಾಯ | 8,00,000/- | 18,60,000/- | ಕೆ.ಟಿ.ಡಿ. ಎಂಟರ್‌ಪ್ರೈಸಸ್ |
| 17 | ಮಹಾಲಕ್ಷ್ಮಿ | 12.00,000/- | 13,44,000/- | ಸಿಪಿಎಸ್ ಪ್ರೈ. ಲಿ. | ಅವಧಿ ಪೂರ್ವ ಮುಕ್ತಾಯ | 5,00,000/- | 9,00,000/- | ಎಸ್.ಸುರೇಖ |
| 18 | ರಾಜಾಜಿನಗರ | 5,25,000/- | 28,92,000/- | ವಿಕೆಡ್‌ರೈಡ್ | ಅವಧಿ ಪೂರ್ವ ಮುಕ್ತಾಯ | 2,00,000/- Area Reduced | 6,25,000/- | ಎಸ್.ಎಂ.ಪಿ. ಎಂಟರ್‌ಪ್ರೈಸಸ್ |
| 19 | ಮಹಾಕವಿ ಕುವೆಂಪು ರಸ್ತೆ | - | - | - | - | 2,00,000/- | 2,25,600/- | ಕೆ.ಟಿ.ಡಿ. ಎಂಟರ್‌ಪ್ರೈಸಸ್ |
| 20 | ಚಿಕ್ಕಪೇಟೆ | 6,00,000/- | 34,01,000/- | ಹೆಚ್.ಕೆ.ಎಸ್. ಸರ್ವೀಸಸ್ | ಅವಧಿ ಪೂರ್ವ ಮುಕ್ತಾಯ | 10,00,000/- | 38,50,000/- Area Increased | ಹೆಚ್.ಕೆ.ಎಸ್. ಸರ್ವೀಸಸ್ |

| | | | | | | | | |
|---|---|---|---|---|---|---|---|---|
| 21 | ನ್ಯಾಷನಲ್ ಕಾಲೇಜು | 15,75,000/- | 76,19,200/- | ವಿಕೆಡ್‌ರೈಡ್ | ಅವಧಿ ಪೂರ್ವ ಮುಕ್ತಾಯ | 10,00,000/- | 24,36,000/- | ಕೆ.ಟಿ.ಡಿ. ಎಂಟರ್‌ಪ್ರೈಸಸ್ |
| 22 | ಜಯನಗರ | 10,00,000/- | 11,30,220/- | ಎಕ್ಸ್‌ಟ್ರಾ ವರ್ಕ್‌ಸ್ಪೇಸ್ ಪ್ರೈ.ಲಿ. | ಅವಧಿ ಪೂರ್ವ ಮುಕ್ತಾಯ | 7,00,000/- | 13,20,000/- | ಕೆ.ಟಿ.ಡಿ. ಎಂಟರ್‌ಪ್ರೈಸಸ್ |
| 23 | ಬನಶಂಕರಿ | 15,00,000/- | 39,00,000/- | ಗಿರೀಶ್. ವಿ. | ಅವಧಿ ಪೂರ್ವ ಮುಕ್ತಾಯ | 15,00,000/- | 26,67,111/- | ಎಂ.ಕೆ. ಬೆಳವಾಡಿ |
| 24 | ಜೆ.ಪಿ.ನಗರ | 5,25,000/- | 22,05,009/- | ಪಿ.ಎ.ಪಿ. ಎಂಟರ್‌ಪ್ರೈಸಸ್ | ಅವಧಿ ಪೂರ್ವ ಮುಕ್ತಾಯ | 5,50,000/- | 23,67,111/- | ಸಪ್ತಾ ಕಂಟ್ರೋಲ್ಸ್ ಪ್ರೈ.ಲಿ. |
| 25 | ಯಲಚೇನಹಳ್ಳಿ | 15,75,000/- | 1,11,05,000/- | ಪೀಕಾಕ್ ಅಲೈಡ್ ಸರ್ವೀಸಸ್ | ಅವಧಿ ಪೂರ್ವ ಮುಕ್ತಾಯ | 15,75,000/- | 93,57,777/- | ಎಂ.ಕೆ. ಬೆಳವಾಡಿ |

ಟಿಪ್ಪಣಿ:

1. ಜಾಲಹಳ್ಳಿ ಮೆಟ್ರೋ ನಿಲ್ದಾಣದಲ್ಲಿ ಈ ಮೊದಲು ಟೆಂಡರ್‌ನಲ್ಲಿ 230 ಚ.ಮೀ. ಪ್ರದೇಶವನ್ನು ನೀಡಿದ್ದು, ಮರುಟೆಂಡರ್‌ನಲ್ಲಿ 1300 ಚ.ಮೀ. ಪ್ರದೇಶವನ್ನು ನೀಡಿದ್ದರಿಂದ ಹೆಚ್ಚಿನ ಪರವಾನಗಿ ಶುಲ್ಕವನ್ನು ಪಡೆದಿರುತ್ತೇವೆ.
2. ಮಹಾಲಕ್ಷ್ಮಿ ನಿಲ್ದಾಣದಲ್ಲಿ ಸಿಪಿಎಸ್ ಕಂಪನಿಗೆ ರೂ. 13,44,000/– ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ಪರವಾನಗಿದಾರರು ನಷ್ಟ ಅನುಭವಿಸಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ಮರುಟೆಂಡರ್‌ನಲ್ಲಿ ಯಾವುದೇ ಬಿಡ್‌ಗಳು ಬಂದಿರುವುದಿಲ್ಲ. ನಂತರದಲ್ಲಿ ಮರುಟೆಂಡರ್ ಮಾಡಿದಾಗ ರೂ. 5,00,000/– ಗಳ ಕನಿಷ್ಠ ದರಕ್ಕೆ; ಎಸ್. ಸುರೇಶರವರು ರೂ. 9,00,000/–ಕ್ಕೆ ಟೆಂಡರ್ ಪಡೆದಿರುತ್ತಾರೆ.
3. ಕೆಂಪೇಗೌಡ ನಿಲ್ದಾಣದಲ್ಲಿ ಕನಿಷ್ಠ ಟೆಂಡರ್ ದರ ರೂ. 25,00,000/–ಗಳಿಗೆ ಸುಬ್ರಮಣಿಯವರು ರೂ. 42,60,600/– ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ಪರವಾನಗಿದಾರರು ನಷ್ಟ ಅನುಭವಿಸಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ಮರುಟೆಂಡರ್‌ನಲ್ಲಿ ಯಾವುದೇ ಬಿಡ್‌ಗಳು ಬಂದಿರುವುದಿಲ್ಲ. ನಂತರದಲ್ಲಿ ಮರುಟೆಂಡರ್ ಮಾಡಿದಾಗ ನಿಲುಗಡೆಯ ಪ್ರದೇಶವನ್ನು ಕಡಿತಗೊಳಿಸಿ ರೂ.10,00,000/– ಗಳ ಕನಿಷ್ಠ ದರಕ್ಕೆ ಪೀಕಾಕ್ ಅಲೈಡ್ ಸರ್ವೀಸಸ್‌ನವರು ರೂ. 16,05,000/–ಕ್ಕೆ ಟೆಂಡರ್ ಪಡೆದಿರುತ್ತಾರೆ.
4. ಹೊಸಹಳ್ಳಿ ನಿಲ್ದಾಣದಲ್ಲಿ ಕನಿಷ್ಠ ಟೆಂಡರ್ ದರ ರೂ. 4,00,000/–ಗಳಿಗೆ ಎಸ್. ಚಂದ್ರಶೇಖರ್‌ರವರು ರೂ. 10,17,111/– ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ನಿಲ್ದಾಣದ ಸುತ್ತಮುತ್ತ ಸರ್ವೀಸ್ ರಸ್ತೆಗಳಿದ್ದು, ಸಾರ್ವಜನಿಕರು ತಮ್ಮ ವಾಹನಗಳನ್ನು ರಸ್ತೆಬದಿಯಲ್ಲಿ ನಿಲುಗಡೆ ಮಾಡುತ್ತಿದ್ದರಿಂದ ಪರವಾನಗಿದಾರರು ನಷ್ಟ

ಅನುಭವಿಸುತ್ತಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ಮರುಟೆಂಡರ್ ಮಾಡಿದಾಗ ಕನಿಷ್ಠ ದರವನ್ನು ಕಡಿಮೆ ಮಾಡಿ ರೂ.3,00.000/- ಗಳ ಕನಿಷ್ಠ ದರಕ್ಕೆ, ಕೆಸಿಬಿಸಿ ಪ್ರೈ.ಲಿ..ನವರು ರೂ. 3.37,777/-ಕ್ಕೆ ಟೆಂಡರ್ ಪಡೆದಿರುತ್ತಾರೆ.

5. ಮೈಸೂರು ರಸ್ತೆ ನಿಲ್ದಾಣದಲ್ಲಿ ಕನಿಷ್ಠ ಟೆಂಡರ್ ದರ ರೂ. 85,00,000/-ಗಳಿಗೆ ವಿಕೆಡ್‌ರೈಡ್ ಇವರು ರೂ. 2.60.00,000/- ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ಪರವಾನಗಿದಾರರು ನಷ್ಟ ಅನುಭವಿಸಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ನಂತರದಲ್ಲಿ ಮರುಟೆಂಡರ್ ಮಾಡಿದಾಗ ರೂ. 1,00.00.000/- ಗಳ ಕನಿಷ್ಠ ದರಕ್ಕೆ, ಎಂ.ಕೆ ಬೆಳವಾಡಿಯವರು ರೂ. 1,96,00.000/-ಕ್ಕೆ ಟೆಂಡರ್ ಪಡೆದಿರುತ್ತಾರೆ.

6. ನ್ಯಾಷನಲ್ ಕಾಲೇಜು ನಿಲ್ದಾಣದಲ್ಲಿ ಕನಿಷ್ಠ ಟೆಂಡರ್ ದರ ರೂ. 15.75,000/-ಗಳಿಗೆ ವಿಕೆಡ್‌ರೈಡ್ ಇವರು ರೂ. 76,19.200/- ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ಪರವಾನಗಿದಾರರು ನಷ್ಟ ಅನುಭವಿಸಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ನಂತರದಲ್ಲಿ ಮರುಟೆಂಡರ್ ಮಾಡಿದಾಗ ರೂ. 10,00.000/- ಗಳ ಕನಿಷ್ಠ ದರಕ್ಕೆ, ಕೆ.ಟಿ.ಡಿ ಎಂಟರ್‌ಪ್ರೈಸಸ್‌ರವರು ರೂ. 24,36,000/-ಕ್ಕೆ ಟೆಂಡರ್ ಪಡೆದಿರುತ್ತಾರೆ.

7. ರಾಜಾಜಿನಗರ ನಿಲ್ದಾಣದಲ್ಲಿ ಕನಿಷ್ಠ ಟೆಂಡರ್ ದರ ರೂ. 5,25.000/-ಗಳಿಗೆ ವಿಕೆಡ್‌ರೈಡ್ ಇವರು ರೂ. 28,92,000/- ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ಪರವಾನಗಿದಾರರು ನಷ್ಟ ಅನುಭವಿಸಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ನಂತರದಲ್ಲಿ ಮರುಟೆಂಡರ್ ಮಾಡಿದಾಗ ರೂ. 2,00,000/- ಗಳ ಕನಿಷ್ಠ ದರಕ್ಕೆ, ಎಸ್.ಎಂ.ಪಿ ಎಂಟರ್‌ಪ್ರೈಸಸ್‌ರವರು ರೂ. 6.25.000/-ಕ್ಕೆ ಟೆಂಡರ್ ಪಡೆದಿರುತ್ತಾರೆ.

8. ಬೈಯ್ಯಪ್ಪನಹಳ್ಳಿ ನಿಲ್ದಾಣದಲ್ಲಿ (ಆರ್.ಎನ್.ಆರ್. ಬದಿ) ಕನಿಷ್ಠ ಟೆಂಡರ್ ದರ ರೂ. 65,00,000/-ಗಳಿಗೆ ವಿಕೆಡ್‌ರೈಡ್ ಇವರು ರೂ. 2,66,00,000/- ಗಳಿಗೆ ಗುತ್ತಿಗೆಯನ್ನು ಪಡೆದಿದ್ದರು. ಆದರೆ ಪರವಾನಗಿದಾರರು ನಷ್ಟ ಅನುಭವಿಸಿದ್ದರಿಂದ ಅವಧಿ ಪೂರ್ವ ಮುಕ್ತಾಯಕ್ಕೆ ಮನವಿ ನೀಡಿದ್ದು, ಅದನ್ನು ಪುರಸ್ಕರಿಸಲಾಗಿತ್ತು. ನಂತರದಲ್ಲಿ ಮರುಟೆಂಡರ್ ಮಾಡಿದಾಗ ರೂ. 70,00,000/- ಗಳ ಕನಿಷ್ಠ ದರಕ್ಕೆ, ಎಸ್.ಎಂ.ಪಿ. ಎಂಟರ್‌ಪ್ರೈಸಸ್‌ರವರು ರೂ. 1,01,47,099/-ಕ್ಕೆ ಟೆಂಡರ್ ಪಡೆದಿರುತ್ತಾರೆ.